ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 12 ನೇ ಮಾರ್ಚ್, 2020

ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಉದ್ದಿಮೆದಾರರ ಬಡ್ಡಿ ರಿಯಾಯಿತಿ ಯೋಜನೆ ಬಗ್ಗೆ

ಶ್ರೀ ಕೆ. ಅಬ್ದುಲ್ ಜಬ್ಬಾರ್ (ನಾಮನಿರ್ದೇಶನ ಹೊಂದಿದವರು) -

ಶ್ರೀ ಶರಣಪ್ಪ ಮಟ್ಟೂರ (ಶಿಕ್ಷಕರ ಕ್ಷೇತ್ರ) -

107 (673+672) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) 2018-19ನೇ ಸಾಲಿನಲ್ಲಿ ಕೆ.ಎಸ್.ಎಫ್.ಸಿ. ವತಿಯಿಂದ ಕರ್ನಾಟಕ ಸರ್ಕಾರದ ಪರಿಶಿಷ್ಟ ಜಾತಿ/ಪಂಗಡಗಳ ಉದ್ದಿಮೆದಾರರ ಬಡ್ಡಿ ರಿಯಾಯಿತಿ ಯೋಜನೆ ಹಾಗೂ ಸಾಮಾನ್ಯ ಸಾಲ ಯೋಜನೆಯಡಿ ಎಷ್ಟು ಅರ್ಹ ಉದ್ದಿಮೆದಾರರಿಗೆ ಸಾಲ ಮಂಜೂರಾತಿ ಮಾಡಲಾಗಿದೆ ; (ಸಂಪೂರ್ಣ ವಿವರವುಳ್ಳ ಮಾಹಿತಿ ಒದಗಿಸುವುದು)

(ಆ) ಸದರಿ ಯೋಜನೆಯಡಿ ಅರ್ಜಿದಾರರಿಂದ ಪ್ರಕ್ರಿಯೆ ಶುಲ್ಕ (Processing Fee) ಪಾವತಿಸಿಕೊಂಡು ಸಾಲ ಮಂಜೂರಾತಿ ಪತ್ರವನ್ನು ನೀಡಿ ಕೆ.ಐ.ಎ.ಡಿ.ಬಿ. ಕೈಗಾರಿಕಾ ನಿವೇಶನ ಗುತ್ತಿಗೆ ಪಡೆಯಲು ಮೊದಲನೆ ಕಂತು ಮಂಜೂರಾದ ಮತ್ತು ಮಂಜೂರು ಆಗಬೇಕಾಗಿರುವವರ ವಿವರ ನೀಡುವುದು ; (ಸಂಪೂರ್ಣ ವಿವರವುಳ್ಳ ಮಾಹಿತಿ ನೀಡುವುದು)

(ಇ) ಮೊದಲನೆ ಕಂತು ಬಿಡುಗಡೆ ಮಾಡುವುದರಲ್ಲಿ ತಾರತಮ್ಯ ಮಾಡಲಾಗಿದೆ ಎಂಬ ಆರೋಪ ಕೇಳಿ ಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?